# ಗಡಿಭಾಗದ ಮಕ್ಕಳ ಮಾತೃ ಭಾಷೆಯ ಕಲಿಕೆ ಮತ್ತು ಶಿಕ್ಷಕರ ಭಾಷಾ ಬೋಧನೆಯ ಸಮಸ್ಯೆಗಳು

ಮಾನವನ ಜೀವನದಲ್ಲಿ ಭಾಷೆಯು ಬಹು ಮುಖ್ಯವಾದಂತಹ ಪಾತ್ರವನ್ನು ವಹಿಸುತ್ತದೆ. ಒಂದು ಸಮಾಜದ ಜನರು ತಮ್ಮ ಭಾವನೆಗಳನ್ನು, ಆಲೋಚನೆಗಳನ್ನು ಇತರರಿಗೆ ತಿಳಿಸಲು ಬಳಸುವ ಸ್ವತಂತ್ರ ಧ್ವನಿಸಂಕೇತಗಳ ವ್ಯವಸ್ಥೆಯೇ ಭಾಷೆಯನಿಸಿಕೊಳ್ಳುತ್ತದೆ. ಇಂತಹ ವ್ಯವಸ್ಥಿತ ಭಾಷೆಯ ಕಲಿಕಾ ಪ್ರಕ್ರಿಯೆಯು ಶಿಕ್ಷಣ ಪಡೆಯುವುದರ ಮೂಲಕ ನಡೆಯುತ್ತದೆ. ಶಿಕ್ಷಣದ ಕಲಿಕೆಯು ಮಾನವನ ಬದುಕನ್ನು ಉತ್ತಮಗೊಳಿಸಿಕೊಳ್ಳಲು, ಅತ್ಯವಶ್ಯಕವಾದ ಅಭ್ಯಾಸಗಳು, ನಡೆ–ನುಡಿಗಳನ್ನು ಹಾಗೂ ವೈಜ್ಞಾನಿಕ ವಿಧಾನಗಳನ್ನು ಆರ್ಜಿಸಿಕೊಳ್ಳಲು ಸಹಾಯಕವಾಗಿರುತ್ತದೆ.

ಸಮಾಜ ಬೆಳೆದಂತೆಲ್ಲಾ ಮಾನವ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮತ್ತೊಂದು ಸಮಾಜದ ಸಂಪರ್ಕವಿರಿಸಿಕೊಂಡ ಕಾರಣ ಒಂದು ಸಮಾಜದ ಭಾಷೆಯ ಪ್ರಭಾವವು ಮತ್ತೊಂದು ಸಮಾಜದ ಭಾಷೆಯ ಮೇಲಾಗುವುದನ್ನು  ಕಾಣಬಹುದಾಗಿದೆ. ಇದಲ್ಲದೆ ಒಂದು ಗುಂಪು ಮತ್ತೊಂದು ಗುಂಪಿನೊಡನೆ ಹೋರಾಡಿ, ಆ ಪ್ರದೇಶವನ್ನು ಗೆದ್ದು, ರಾಜ್ಯ ಸ್ಥಾಪನೆ ಮಾಡಿ ತನ್ನ ಭಾಷೆಯನ್ನು ಬಲತ್ಕಾರವಾಗಿ ಪ್ರಜೆಗಳ ಮೇಲೆ ಹೇರಿರುವುದನ್ನು ಕಾಣಬಹುದಾಗಿದೆ. ಹೀಗೆ ಹಲವಾರು ಸನ್ನಿವೇಶಗಳಲ್ಲಿ ಒಂದೇ ಭಾಷೆಯುಳ್ಳ ಸಮಾಜವು ಅನ್ಯಭಾಷೆಯ ಪ್ರಭಾವಕ್ಕೆ ಒಳಗಾಗುವುದರ ಮೂಲಕ ದ್ವಿಭಾಷಿಕ ಪರಿಸರ ಹಾಗೂ ಬಹುಭಾಷಿಕ ಪರಿಸರಕ್ಕೆ ಒಳಗಾಗಿರುವುದೂ ಕಂಡು ಬರುತ್ತದೆ. ಇದರ ಪರಿಣಾಮವಾಗಿ ಒಂದು ಸಮಾಜದ ವ್ಯಕ್ತಿಗಳು ತಮ್ಮದಲ್ಲದ ಅನ್ಯಭಾಷೆಯನ್ನು ನಾನಾ ಕಾರಣಗಳಿಗಾಗಿ ಕಲಿಯುವ ಅವಕಾಶಗಳು ಒದಗಿಬರುತ್ತವೆ. ಈ ರೀತಿಯಾಗಿ ಭಾಷೆ, ಸಮಾಜ ಮತ್ತು ಸಂಸ್ಕೃತಿ ಒಂದನ್ನೊಂದು ಅವಲಂಬಿಸಿವೆ. ಈ ರೀತಿಯಾಗಿ ಒಂದು ಪ್ರದೇಶದಲ್ಲಿ ಮುಖ್ಯವಾಗಿ ಭಾಷಾ ಕ್ಷೇತ್ರದ ಮೂಲಕ ಗಮನಿಸಿದಾಗ ಏಕಭಾಷಿಕರು, ದ್ವಿಭಾಷಿಕರು, ಇಲ್ಲವೆ ಬಹುಭಾಷಿಕರು ಇರುವುದು ಕಂಡು ಬರುತ್ತದೆ.

ಪ್ರತಿ ನಿತ್ಯದ ಜೀವನ ಕ್ರಮದಲ್ಲಿ ವ್ಯಕ್ತಿಗಳು ಎರಡು ಭಾಷೆಗಳನ್ನು ಅಥವಾ ಎರಡು ಉಪಭಾಷೆಗಳನ್ನು  ದೈನಂದಿನ ವ್ಯವಹಾರಗಳಲ್ಲಿ ಉಪಯೋಗಿಸುವಂತಿದ್ದರೆ, ಅವರನ್ನು ದ್ವಿಭಾಷಿಕರೆಂದು ಕರೆಯುವರು. ಈ ಪರಿಭಾಷೆಯಿಂದ ವಲಸೆ ಬಂದ  ಕಾರ್ಮಿಕರನ್ನು, ಯಾರಿಗೆ ಕೇವಲ  ಅಲ್ಪಸ್ವಲ್ಪ ಮಾತಾಡಲು ಬಂದರೂ ಸಾಕು, ಬರೆಯಲು ಅಥವಾ ಓದಲು ಬರದಿದ್ದರೂ ಅಂತವರನ್ನು ದ್ದಿಭಾಷಿಕರೆಂದು ಪರಿಗಣಿಸಲಾಗುವುದು. ಆದರೆ ನಗರ ಪ್ರದೇಶಗಳಲ್ಲಿ, ಗಡಿಭಾಗದ ಪರಿಸರದಲ್ಲಿ ಬಹುತೇಕವಾಗಿ ದ್ವೀಭಾಷಿಕ ಪರಿಸರ ಕಂಡು ಬರುತ್ತದೆ. ಇದರೊಂದಿಗೆ ವಾಣಿಜ್ಯ ನಗರಗಳಲ್ಲಿ, ಮಹಾನಗರಗಳಲ್ಲಿ ಎರಡಕ್ಕಿಂತ ಹೆಚ್ಚಿನ ಭಾಷೆಯ ಬಳಕೆಯಿರುವುದರಿಂದ ಬಹುಭಾಷಿಕ ಪರಿಸರವೆಂದು ಗುರುತಿಸಲಾಗುವುದು.

ಕರ್ನಾಟಕದ ಏಕೀಕರಣದ ಪೂರ್ವದಲ್ಲಿ ಕನ್ನಡದ ವಿವಿಧ ಪ್ರದೇಶಗಳು ಆಡಳಿತದ ವಿಭಾಗಗಳಲ್ಲಿ ಹರಿದು ಹಂಚಿ ಹೋಗಿದ್ದವು. ಮೈಸೂರು ಸಂಸ್ಥಾನಕ್ಕೆ ಸೇರಿದ ಪ್ರದೇಶವು ದೊಡ್ಡದಾದ ಕನ್ನಡ ಭಾಗವಾಗಿತ್ತು. ಎರಡು ಸಾವಿರ

ವರ್ಷಗಳಿಗೂ ಹೆಚ್ಚಿನ ಚರಿತ್ರೆಯನ್ನು ಹೊಂದಿರುವ ಕರ್ನಾಟಕವು ಸಾಂಸ್ಕೃತಿಕವಾಗಿ ಅಖಂಡವಾದುದು. ಇಂತಹ ಕರ್ನಾಟಕ ರಾಜ್ಯದಲ್ಲಿ ದ್ವಿಭಾಷಿಕತೆಯ ಪ್ರದೇಶಗಳು ಹಾಗೂ ಬಹುಭಾಷಿಕತೆಯ ಪ್ರದೇಶಗಳು ಹೆಚ್ಚಾಗಿ ಕಂಡು ಬರುತ್ತವೆ. ದ್ವಿಭಾಷಿಕರೆಂದರೆ ಒಂದಕ್ಕಿಂತ ಹೆಚ್ಚು – ಇಲ್ಲಿ ಎರಡು ಭಾಷೆಗಳನ್ನು ಸಮರ್ಥವಾಗಿ ಬಳಸಬಲ್ಲವರನ್ನು ದ್ವಿಭಾಷಿಕರೆಂದು ಕರೆಯುತ್ತಾರೆ. ಉದಾಹರಣೆಗೆ ಕನ್ನಡ ಭಾಷೆಯೊಂದಿಗೆ ಇತರೆ ಭಾಷೆಯನ್ನು ಸಮರ್ಪಕವಾಗಿ ಬಳಕೆ ಮಾಡುವ ಪ್ರಮುಖ ಭಾಷಿಕರೆಂದರೆ :

ಕನ್ನಡ – ಮಲೆಯಾಳಂ, ಕನ್ನಡ – ಉರ್ದು, ಕನ್ನಡ – ಕೊಡವ,

ಕನ್ನಡ – ಮರಾಠಿ, ಕನ್ನಡ – ಕೊಂಕಣಿ, ಕನ್ನಡ – ತುಳು,

ಕನ್ನಡ – ತೆಲುಗು, ಕನ್ನಡ – ತಮಿಳು, ಕನ್ನಡ – ಲಂಬಾಣಿ,

ಹೀಗೆ ಕರ್ನಾಟಕದಲ್ಲಿ ದ್ವಿಭಾಷಿಕತೆಯ ಪ್ರದೇಶಗಳು ಕಂಡು ಬರುತ್ತವೆ. ಈ ದ್ವಿಭಾಷಿಕರು ಒಂದು ನಿರ್ದಿಷ್ಟ ಭೂಭಾಗಕ್ಕೆ ಸೀಮಿತವಾಗಿರದೆ ಹಲವಾರು ಜಿಲ್ಲೆಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಹರಡಿ ಹೋಗಿರುವುದು ಕಂಡು ಬರುತ್ತದೆ. ಒಂದು ಭ಼ಾಷೆಯ ಸಂಪರ್ಕದಿಂದಲೂ ಹಾಗೂ ಆ ಭಾಷೆಯನ್ನು ಕಲಿಯುವ ಹಂಬಲದಿಂದಲೂ ಸಹ ದ್ವಿಭಾಷಿಕತೆಯ ಪರಿಸರ ಉಂಟಾಗುವುದು. ಕರ್ನಾಟಕದಲ್ಲಿ ಇಂತಹ ದ್ವಿಭಾಷಿಕ ಪರಿಸರ ಉಂಟಾಗಲು ವಲಸೆಯ ಜೊತೆಗೆ ಮುಖ್ಯವಾದಂತಹ ಕಾರಣವೆಂದರೆ ಆಂಗ್ಲರ ಆಳ್ವಿಕೆ. ಆಂಗ್ಲರು ಭಾರತವನ್ನು ಆಕ್ರಮಿಸಿದಂತೆಲ್ಲಾ ತಮ್ಮ ಒಡೆದು ಆಳುವ ಧೋರಣೆಯನ್ನು ಪ್ರಯೋಗಿರುವುದರ ಮೂಲಕ ಕನ್ನಡದ ಭೂಪ್ರದೇಶಗಳನ್ನು ೧೭೯೯ ರ ಟಿಪ್ಪುಸುಲ್ತಾನನ ಸೋಲಿನೊಂದಿಗೆ ಬ್ರಿಟಿಷರು ವಿಭಿನ್ನ ಆಡಳಿತ ಘಟಕಗಳಲ್ಲಿ ವಿಭಜಿಸಿದರು. ನಂತರ ಮರಾಠರಿಗೂ, ಹೈದರಾಬಾದಿನ ನಿಜಾಮನಿಗೂ ಕೆಲವು ಪ್ರದೇಶಗಳನ್ನು ಹಂಚಿದ್ದು ಉಳಿದ ಭಾಗವನ್ನು ಮೈಸೂರು ಸಂಸ್ಥಾನದ ಒಡೆಯರಿಗೆ ನೀಡಲಾಯಿತು. ಅಲ್ಲದೆ ಒಂದಷ್ಟು ಭಾಗವನ್ನು ತಮ್ಮ ನೇರವಾದ ಆಳ್ವಿಕೆಗೆ ತೆಗೆದುಕೊಂಡರು. ಹೀಗೆ ಕನ್ನಡಿಗರು ಭಾಗ ಉಪಭಾಗಗಳಾಗಿ ಹತ್ತು ಹಲವು ಕಡೆಗೆ ಹಂಚಿಹೋದರು. ಈ ಬಗೆಯ ಹಂಚಿ ಹೋದ ಭಾಗಗಳನ್ನು ೨೨ ಎಂದು ಗುರುತಿಸಲಾಯಿತು. ಇಂತಹ ಹರಿದು ಹಂಚಿ ಹೊಗಿದ್ದ ರಾಜ್ಯದಲ್ಲಿ ಕನ್ನಡ ಭಾಷೆಯನ್ನು ಆಡುವ ಜನರು ವಿವಿಧ ಭಾಷಾಸಮುದಾಯಗಳೊಡನೆ ಮತ್ತು ಕನ್ನಡಿಗರೊಡನೆ ವ್ಯವಹರಿಸುವುದು ಅನಿವಾರ್ಯವಾಯಿತು.

ಬ್ರಿಟಿಷರ ಸರಕಾರ ತನ್ನ ಆಡಳಿತದ ಅನುಕೂಲಕ್ಕೆ ತಕ್ಕ ಹಾಗೆ ಭಾರತದ ಗಡಿಗಳನ್ನು ನಿರ್ಧರಿಸಿಕೊಂಡಿತ್ತು. ಇದು ಭಾಷಿಕ ನೆಲೆಯಲ್ಲಿ ಹಲವಾರು ರೀತಿಯ ಸಮಸ್ಯೆಗಳ ಹುಟ್ಟಿಗೆ ಕಾರಣವಾಯಿತು. ಬೇರೆ ಬೇರೆ ಪ್ರಾಂತ್ಯಗಳಲ್ಲಿ ಹಂಚಿ ಹೋಗಿದ್ದ ಒಂದೇ ಭಾಷೆಯನ್ನಾಡುವ ಜನರು ಭಾಷಿಕ ನೆಲೆಯಲ್ಲಿ ಮತ್ತೆ ಒಂದುಗೂಡುವ ಪ್ರಯತ್ನಕ್ಕೆ ಮುಂದಾದರು. ಭಾಷಾವಾರು ಪ್ರಾಂತ್ಯಗಳ ರಚನೆಯ ಹಿನ್ನಲೆಯಲ್ಲಿ ೧೯೫೩ರಂದು 'ಆಂಧ್ರಪ್ರದೇಶ'ವು ರಚನೆಯಾಗುವುದರ ಮೂಲಕ ಪ್ರಪ್ರಥಮವಾಗಿ ಭಾಷೆಯ ಆಧಾರದ ಮೇಲೆ ಪ್ರತ್ಯೇಕ ರಾಜ್ಯವಾಗಿ ರಚನೆಗೊಂಡಿತು. ನಂತರ ೧೯೫೬ ನವೆಂಬರ್ ೧ ರಂದು ಮೈಸೂರು ರಾಜ್ಯ, ತಮಿಳುನಾಡು, ಕೇರಳ ರಾಜ್ಯಗಳು ಅಸ್ತಿತ್ವಕ್ಕೆ ಬಂದವು. ಮುಂದೆ ನವೆಂಬರ್ ೧, ೧೯೭೩ ರಂದು ಮೈಸೂರು ರಾಜ್ಯಕ್ಕೆ 'ಕರ್ನಾಟಕ ರಾಜ್ಯ' ಎಂದು ನಾಮಕರಣ ಮಾಡಲಾಯಿತು. ಕರ್ನಾಟಕ ರಾಜ್ಯದ ಆಡಳಿತ ಭಾಷೆಯಾಗಿ 'ಕನ್ನಡ' ಭಾಷೆಯನ್ನು ಘೋಷಿಸಲಾಯಿತು.

ಕರ್ನಾಟಕ ರಾಜ್ಯವು ಮಹಾರಾಷ್ಟ್ರ, ತಮಿಳುನಾಡು, ಆಂಧ್ರಪ್ರದೇಶ, ಕೇರಳ, ಗೋವಾದಂತಹ ರಾಜ್ಯಗಳೊಂದಿಗೆ ಗಡಿಪ್ರದೇಶವನ್ನು ಹಂಚಿಕೊಂಡಿದೆ. ಈ ಗಡಿನಾಡು ಎನ್ನುವುದು ಒಂದು ವಿಶಿಷ್ಟ ಪ್ರದೇಶ. ಬೇರೆ ರಾಜ್ಯಗಳಿಗೆ

ಹೊಂದಿಕೊಂಡಿರುವ ನಮ್ಮ ರಾಜ್ಯದ ಭೌಗೋಳಿಕ ಪ್ರದೇಶಗಳನ್ನು ತಾಂತ್ರಿಕವಾಗಿ ಗಡಿನಾಡೆಂದು ಗುರುತಿಸಲಾಗುವುದು. ಈ ಗಡಿ ಪರಿಸರದಲ್ಲಿ ಕಡೇ ಪಕ್ಷ ಎರಡು ಭಾಷೆ, ಎರಡು ಸಂಸ್ಕೃತಿಗಳು, ಎರಡು ಭಾಷಾಮಾಧ್ಯಮದ ಶಾಲೆಗಳನ್ನು ಹೊಂದಿರುವುದು ಕಂಡು ಬರುತ್ತದೆ. ಈ ರೀತಿಯಾಗಿ ಕರ್ನಾಟಕ ರಾಜ್ಯವು ಒಟ್ಟು ಐದು ರಾಜ್ಯಗಳೊಂದಿಗೆ ೫೨ ಗಡಿ ತಾಲ್ಲೂಕುಗಳನ್ನು ಹೊಂದಿರುವುದನ್ನು ಕಾಣಬಹುದಾಗಿದೆ.

ಕರ್ನಾಟಕದಲ್ಲಿ ಕನ್ನಡ ಭಾಷೆಯನ್ನು ಆಡಳಿತ ಭಾಷೆಯನ್ನಾಗಿ ಅಧಿಕೃತಗೊಳಿಸಿರುವುದರಿಂದ ಉಳಿದ ಭಾಷೆಗಳಾದ ಮಲೆಯಾಳಂ, ಉರ್ದು, ತೆಲುಗು, ತಮಿಳು, ಹಾಗೂ ಮರಾಠಿ, ಲಂಬಾಣಿ ಭಾಷೆಯ ಮೇಲೆ ಕನ್ನಡ ಭಾಷೆಯ ಪ್ರಭಾವವನ್ನು ಕಾಣಬಹುದಾಗಿದೆ. ಕನ್ನಡ ಭಾಷೆಯನ್ನು ಹೊರತು ಪಡಿಸಿ ' ಬೇರೊಂದು ಭಾಷೆಯನ್ನು ಮಾತೃಭಾಷೆಯನ್ನಾಗಿ ಹೊಂದಿರುವ ಗಡಿಭಾಗದ ಮಕ್ಕಳು ಪಠ್ಯಪುಸ್ತಕದಲ್ಲಿ ಕಡ್ಡಾಯವಾಗಿ ಕನ್ನಡ ಭಾಷೆಯನ್ನು್ನ ಕಲಿಯಲೇಬೇಕು ಎಂಬ ನಿಯಮವನ್ನು ರೂಪಿಸಿರುವುದರಿಂದ ಮಕ್ಕಳು ಶಾಲೆಯಲ್ಲಿ ಕನ್ನಡ ಭಾಷೆಯನ್ನ ಕಲಿಯಲು ಮುಂದಾಗಿರುವುದು ಕಂಡು ಬರುತ್ತದೆ. ಇಂತಹ ಸಂದರ್ಭದಲ್ಲಿ ಕನ್ನಡ ಭಾಷೆಯನ್ನು ಕಲಿಯುವಂತಹ ಮಕ್ಕಳು ಹಾಗೂ ಕನ್ನಡ ಭಾಷೆಯನ್ನು ಬೋಧಿಸುವಂತಹ ಶಿಕ್ಷಕರು ಶಾಲೆಯಲ್ಲಿ ಎದುರಿಸುವಂತಹ ಸಮಸ್ಯೆಗಳು ಹಲವಾರು ರೀತಿಯಲ್ಲಿ ಕಂಡು ಬರುತ್ತದೆ. ಪ್ರಸ್ತುತ ಈ ಲೇಖನದ ರಚನೆಯನ್ನು ಆಂಧ್ರಪ್ರದೇಶ ಮತ್ತು ಕರ್ನಾಟಕದ ಗಡಿಭಾಗದಲ್ಲಿ ಕಂಡು ಬರುವ ಮಕ್ಕಳ ಕನ್ನಡ ಕಲಿಕೆಯ ಸಮಸ್ಯೆಗಳನ್ನು ಆಧರಿಸಿಕೊಂಡು ಮಾಡಲಾಗಿದೆ.

- ಗಡಿಭಾಗದಲ್ಲಿ ಕಂಡು ಬರುವ ಮಕ್ಕಳು ಶಾಲೆಯಲ್ಲಿ ಕನ್ನಡ ಭಾಷೆಯ ಕಲಿಕೆಯನ್ನು ಕಲಿಯುವಾಗ ಮಾತೃಭಾಷೆಯ ಕಲಿಕೆಯು ಅಡ್ಡಿಪಡಿಸುವುದು ಕಂಡು ಬರುತ್ತದೆ. ಇದರಿಂದ ಕನ್ನಡ ಭಾಷೆಯ ಕಲಿಕೆಯು ಹೆಚ್ಚು ಕಷ್ಟಕರವಾಗಿರುವುದನ್ನು ಕಾಣಬಹುದಾಗಿದೆ. ಶಾಲೆಯಲ್ಲಿ ಮಕ್ಕಳು ಕನ್ನಡ ಭಾಷೆಯನ್ನು ಓದುವಾಗ ಹಲವಾರು ತಪ್ಪುಗಳನ್ನು ಮಾಡುತ್ತಿರುವುದು ಕಂಡು ಬರುತ್ತದೆ. ಶಿಕ್ಷಕರು ಮಕ್ಕಳಿಗೆ ಸರಿಯಾಗಿ ಕನ್ನಡ ಭಾಷೆಯನ್ನು ಉಚ್ಚರಿಸುವ ರೀತಿಯನ್ನು ಹೇಳಿಕೊಡದೆ ಇರುವುದರಿಂದ ಮಕ್ಕಳು ಕನ್ನಡವನ್ನು ಓದುವಾಗ ಹಲವಾರು ತಪ್ಪುಗಳನ್ನು ಮಾಡುತ್ತಿರುವುದು ಕಂಡು ಬರುತ್ತದೆ.

ಉದಾಹರಣೆಗೆ:–

| ಬರಹ ರೂಪ | ಮಕ್ಕಳು ಓದುವ ರೂಪ |
|---|---|
| ಆಚರಿಸು ಹಾಚರಿಸು | ಅಂತಹ ಅತಹ |
| ಐದು ಅಯಿದು | ಅಂಗಳಕ್ಕೆ ಅಗಳಕೆ |
| ಖಂಡ ಕಡ | ಒಟ್ಟಾರೆಯಾಗಿ ಒತ್ತಾರೆಯಗಿ |
| ಛಲ ಚಲ | ದಿಕ್ಕಿನಲ್ಲಿ ದಕ್ಕಿನಲ್ಲಿ |
| ಫಲಹಾರ ಪಲಹಾರ | ಪುಣ್ಯ ಪಣ್ಯ |
| ಬಂದ ಬದ | ಮುಂತಾದ ಮಾಂತಾದ |
| ಭೋಜನ ಬೊಜನ | ಮಕ್ಕಳ ಮಕಲ |
| ಮೊಲ ಮಲ | ಸ್ವತಃ ಸ್ವಂತ |

- ಮಕ್ಕಳು ಶಾಲೆಯಲ್ಲಿ ಕನ್ನಡ ಭಾಷೆಯನ್ನು ಕಲಿಯುವಾಗ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿರುವುದು ಕಂಡು ಬರುತ್ತದೆ. ಮಕ್ಕಳ ಮಾತೃಭಾಷೆಯು ತೆಲುಗು, ತಮಿಳು, ಉರ್ದು, ಮರಾಠಿ, ಲಂಬಾಣಿ ಆಗಿದ್ದು, ಶಾಲೆಯಲ್ಲಿ ಶಿಕ್ಷಕರು ಕನ್ನಡ ಮಾತೃಭಾಷೆಯ ಮೂಲಕ ವಿವರಣೆ ನೀಡುವುದರ ಮೂಲಕ ಮಕ್ಕಳಿಗೆ ಸಮರ್ಪಕವಾಗಿ ಅರ್ಥೈಸುವಲ್ಲಿ ವಿಫಲರಾಗುತ್ತಿದ್ದಾರೆ. ಗಡಿಭಾಗದ ಶಾಲೆಯಲ್ಲಿ ದ್ವಿಭಾಷಿಕ ಪರಿಸರ ಇರುವುದರಿಂದ ಶಿಕ್ಷಕರು ಕನ್ನಡ ಮಾಧ್ಯಮದ ಮೂಲಕ ಮಕ್ಕಳಿಗೆ ಕಲಿಸುವುದರಿಂದ ಕನ್ನಡೇತರ ಭಾಷೆಯನ್ನು ಮಾತೃಭಾಷೆಯನ್ನಾಗಿ ಹೊಂದಿರುವ ಮಕ್ಕಳಿಗೆ ವಿಷಯದ ಸರಿಯಾದ ಗ್ರಹಿಕೆಯಾಗದೆ ಕಲಿಕೆಯಲ್ಲಿ ನಿರಾಸಕ್ತಿಯನ್ನು ತೋರಿಸುತ್ತಿರುವುದು ಕಂಡು ಬರುತ್ತದೆ.
- ತೆಲುಗು, ತಮಿಳು, ಉರ್ದು, ಮರಾಠಿ, ಲಂಬಾಣಿ ಭಾಷೆಯನ್ನು ಆಡುವಂತಹ ಮಕ್ಕಳು ಶಾಲೆಯಲ್ಲಿ ಕನ್ನಡ ಭಾಷೆಯ ಬೋಧನೆಯ ಸಂದರ್ಭದಲ್ಲಿ ಶಿಕ್ಷಕರು ಮತ್ತು ಮಕ್ಕಳ ಮಾತೃಭಾಷೆಯು ಬೇರೆ ಬೇರೆಯಾಗಿದ್ದ ಸಂದರ್ಭದಲ್ಲಿ ಶಿಕ್ಷಕರು ಮತ್ತು ಮಕ್ಕಳ ನಡುವಿನ ಬೋಧನಾ ಪ್ರಕ್ರಿಯೆಯಲ್ಲಿ ಸಮರ್ಪಕ ಸಂವನದ ಅಡೆತಡೆಗಳು ಕಂಡು ಬರುವುದನ್ನು ಕಾಣಬಹುದಾಗಿದೆ.
- ಶಾಲೆಯಲ್ಲಿ ಮಕ್ಕಳು ಕನ್ನಡ ಭಾಷೆಯನ್ನು ಬರೆಯುವಾಗ ಹಲವಾರು ತಪ್ಪುಗಳನ್ನು ಮಾಡುತ್ತಿರುವುದು ಕಂಡು ಬರುತ್ತದೆ. ಮಕ್ಕಳಲ್ಲಿ ಶಿಕ್ಷಕರು ಕನ್ನಡ ಭಾಷೆಯ ರಚನೆಯ ಕುರಿತು ಸರಿಯಾದ ತಿಳುವಳಿಕೆಯನ್ನ ನೀಡದೆ ಇರುವುದು ಮಕ್ಕಳು ಕನ್ನಡ ಕಲಿಕೆಯನ್ನು ಕಲಿಯುವಲ್ಲಿ ವಿಫಲರಾಗುತ್ತಿದ್ದಾರೆ. ಇದರಿಂದ ಮಕ್ಕಳು ಕನ್ನಡ ಭಾಷೆಯನ್ನು ಬರೆಯುವಾಗ ಹಲವಾರು ತಪ್ಪುಗಳನ್ನು ಮಾಡುತ್ತಿರುವುದು ಕಂಡು ಬರುತ್ತದೆ. ಉದಾಹರಣೆಗೆ:

| ಬರಹ ರೂಪ | ಮಕ್ಕಳ ಬರವಣಿಗೆ ರೂಪ | ಬರಹ ರೂಪ | ಮಕ್ಕಳ ಬರವಣಿಗೆ ರೂಪ |
|---|---|---|---|
| ಆಟ | ಅಟ | ಅಧಿಕಾರ | ಅದಿಕಾರ |
| ಆಗಸ | ಅಗಸ | ತಪಾಸಣೆ | ತಪಸನೆ |
| ಈಶ | ಇಸ | ಮಕ್ಕಳ | ಮಕಲ |
| ಓದುವುದು | ಒದುವುದು | ವಿಷಯ | ವಿಸಯ |
| ಗಂಭೀರ | ಗಂಬಿರ | ವಿಭಾಗ | ವಿಬಾಗ |
| ನೀರು | ನಿರು | ಶಾಲೆ | ಸಾಲೆ |
| ಫಲಹಾರ | ಪಲಹರ | ಸಾಂಸ್ಕೃತಿಕ | ಸಸ್ಕಾತಿಕ |
| ಬಾಂದವ್ಯ | ಬಾಂದಮಯ | ಹಠಮಾರಿ | ಹಟಮಾರಿ |
| ವಿದ್ಯಾಭ್ಯಾಸ | ವಿದ್ಯಾಬಾಸ | ಹಾಗೂ | ಹಾಗು |

- ಮಕ್ಕಳು ಶಾಲೆಯ ಪರಿಸರದಲ್ಲಿ ಸ್ನೇಹಿತರೊಂದಿಗೆ ತಮ್ಮ ಮಾತೃಭಾಷೆಯಾದಂತಹ ತೆಲುಗು, ಉರ್ದು, ಲಂಬಾಣಿ, ಮರಾಠಿ, ತಮಿಳು ಭಾಷೆಯನ್ನು ಹೆಚ್ಚಾಗಿ ಬಳಕೆಯನ್ನು ಮಾಡುವುದರಿಂದ ಹಾಗೂ ಮನೆಯ ವಾತಾವರಣದಲ್ಲಿ ಕನ್ನಡ ಭಾಷೆಯ ಬಳಕೆಯು ಇಲ್ಲದೆ ಇರುವುದರಿಂದ ಕನ್ನಡವನ್ನು ಪ್ರಬುದ್ಧವಾಗಿ ಕಲಿಯುವಲ್ಲಿ ವಿಫಲರಾಗುತ್ತಿದ್ದಾರೆ.
- ಗಡಿಭಾಗದಲ್ಲಿ ಭಾಷಾ ವಿಷಯವನ್ನು ಬೋಧಿಸುವಂತಹ ಶಿಕ್ಷಕರು ಒಂದಕ್ಕಿಂತ ಹೆಚ್ಚಿನ ಭಾಷೆಯನ್ನು ಬಲ್ಲವರಾಗಿರಬೇಕು. ಇಲ್ಲದೆ ಹೋದರೆ ಮಕ್ಕಳಿಗೆ ಭಾಷೆಯ ವಿಷಯವನ್ನು ಸರಿಯಾಗಿ ಅರ್ಥೈಸುವಲ್ಲಿ ವಿಫಲರಾಗುತ್ತಾರೆ. ಕರ್ನಾಟಕ ಆಂಧ್ರ ಗಡಿಭಾಗಕ್ಕೆ ನಿಯೋಜನೆಗೊಳ್ಳುವ ಶಿಕ್ಷಕರು ಆಯಾ ಪ್ರದೇಶದಲ್ಲಿ ಬಳಕೆ ಇರುವ ಭಾಷೆಯ ಬಗ್ಗೆ ತಿಳುವಳಿಕೆಯನ್ನು ಹೊಂದಿದ್ದರೆ ಮಕ್ಕಳಿಗೆ ಉತ್ತಮವಾಗಿ ಬೋಧನೆ ಮಾಡಲು ಸಾಧ್ಯವಾಗುತ್ತದೆ. ಇದರೊಂದಿಗೆ ಶಿಕ್ಷಕರು ಮಕ್ಕಳ ಕಲಿಕೆಯ ಪ್ರಗತಿಯ ಬಗ್ಗೆ ಪೋಷಕರೊಂದಿಗೆ ಚರ್ಚಿಸುವಾಗ ಕನ್ನಡ ಭಾಷೆಯನ್ನು ಬಲ್ಲಂತಹ ಪೋಷಕರು ಇದ್ದರೆ ಸಮರ್ಪಕವಾಗಿ ಮಕ್ಕಳ ಕಲಿಕೆಯ ಬಗ್ಗೆ ಚರ್ಚಿಸಲು ಸಹಾಯಕವಾಗುತ್ತದೆ. ಇಲ್ಲದ್ದಿದ್ದರೆ ಮಕ್ಕಳ ಕಲಿಕೆಯ ಪ್ರಗತಿಯ ಬಗ್ಗೆ ತಿಳಿಸಲು ಶಿಕ್ಷಕರಿಗೆ ಹಲವಾರು ಸವಾಲುಗಳು ಎದುರಾಗುತ್ತವೆ. ಇಂತಹ ಒಂದು ಸನ್ನಿವೇಶವನ್ನು ಗಡಿಭಾಗದಲ್ಲಿ ಹೆಚ್ಚು ತೆಲುಗು ಪ್ರಭಾವಿತ ಕನ್ನಡ ಶಾಲೆಯಲ್ಲಿನ ಪೋಷಕರು ತೆಲುಗು ಭಾಷೆಯನ್ನು ಅರ್ಥೈಸಿಕೊಳ್ಳದ ಶಿಕ್ಷಕರೊಂದಿಗೆ ತಮ್ಮ ಮಕ್ಕಳ ಕಲಿಕೆಯ ಪ್ರಗತಿಯ ಬಗ್ಗೆ ಚರ್ಚಿಸಲು ಮುಂದಾಗದೆ, ಸಭೆ ಸಮಾರಂಭಗಳಲ್ಲಿ ಭಾಗವಹಿಸದಿರುವುದು ಕಂಡು ಬರುತ್ತದೆ.
- ಶಿಕ್ಷಕರು ಮಕ್ಕಳ ಕಲಿಕೆಯ ಪರಿಸರವನ್ನು ಸರಿಯಾಗಿ ಅರ್ಥೈಸಿಕೊಳುವಲ್ಲಿ ವಿಫಲರಾಗಿರುವುದರಿಂದ ಕಲಿಕೆಯ ಸಂದರ್ಭದಲ್ಲಿ ಮಕ್ಕಳಲ್ಲಿ ಕಂಡು ಬರುವ ಗೊಂದಲಗಳು, ಸಮಸ್ಯೆಗಳನ್ನು ಸಮರ್ಪಕವಾಗಿ ಅರಿಯುವಲ್ಲಿ ವಿಫಲರಾಗುತ್ತಿದ್ದಾರೆ. ಶಿಕ್ಷಕರು ಮಕ್ಕಳಿಗೆ ಶಾಲೆಯಲ್ಲಿ ಕನ್ನಡ ಭಾಷೆಯನ್ನು ಕಲಿಸುವಾಗ ಮಕ್ಕಳ ಬಗೆಗಿನ ಪೂರ್ವಗ್ರಹಗಳು, ಮಕ್ಕಳ ಪೋಷಕರ ಬಗೆಗಿನ ಶಿಕ್ಷಕರ ಮನೋಭಾವನೆಗಳು ಸಹ ಮಕ್ಕಳ ಸಮರ್ಪಕ ಕಲಿಕೆಯ ವಿಫಲತೆಗೆ ಕಾರಣವಾಗುತ್ತಿವೆ.
- ಶಾಲೆಯಲ್ಲಿ ಮಕ್ಕಳು ಒಂದು ಕ್ಷೇತ್ರದಲ್ಲಿ ವಿಶೇಷವಾದ ಸಾಮರ್ಥ್ಯವನ್ನು ಹೊಂದಿರುತ್ತಾರೆ. ಇಂತಹ ಮಕ್ಕಳಲ್ಲಿ ಕಂಡು ಬರುವ ವಿಶೇಷ ಸಾಮರ್ಥ್ಯಗಳನ್ನು ಗುರುತಿಸಿ ಪೋಷಿಸದೇ ಇರುವುದು, ಶಿಕ್ಷಕರು ಮಕ್ಕಳಲ್ಲಿ ಕಂಡು ಬರುವ ಧನಾತ್ಮಕ ಅಂಶಗಳನ್ನು ಗುರುತಿಸಿ ಪ್ರಶಂಸೆ ಮಾಡದೇ ಇರುವುದು, ಇದರೊಂದಿಗೆ ಶಾಲೆಯಲ್ಲಿ ಕಂಡು ಬರುವ

ಎಲ್ಲಾ ಮಕ್ಕಳು ಒಂದೇ ರೀತಿಯ ಮನೋಭಾನೆಯನ್ನು, ಬುದ್ಧಿಶಕ್ತಿಯನ್ನು ಹೊಂದಿರುವುದಿಲ್ಲ. ಇಂತಹ ಸಂದರ್ಭದಲ್ಲಿ ಶಿಕ್ಷಕರು ಮಕ್ಕಳ ಕಲಿಕಾ ಭಿನ್ನತೆಗಳನ್ನು ಗುರುತಿಸದೆ ಎಲ್ಲರಿಗೂ ಒಂದೇ ರೀತಿಯಲ್ಲಿ ಬೋಧನೆಯನ್ನು ಮಾಡುತ್ತಿರುವುದನ್ನ ಕಾಣಬಹುದಾಗಿದೆ.

- ಶಿಕ್ಷಕರಲ್ಲಿ ಭಾಷಾ ಪಾಂಡಿತ್ಯದ ಕೊರತೆ ಕಂಡು ಬರುವುದರಿಂದ ತರಗತಿಯಲ್ಲಿ ಕನ್ನಡ ಭಾಷಾ ಬೋಧನೆಯ ಸಂದರ್ಭದಲ್ಲಿ ನಿರರ್ಗಳವಾಗಿ ಕನ್ನಡ ಭಾಷೆಯನ್ನ ಬೋಧಿಸಿ ಅರ್ಥೈಸುವಲ್ಲಿ ಶಿಕ್ಷಕರು ವಿಫಲರಾಗುವುದನ್ನ ಕಾಣಬಹುದಾಗಿದೆ.
- ಪಾರಂಪರಿಕವಾದಂತಹ ಬೋಧನಾ ವಿಧಾನಗಳಿಗೆ ಶಿಕ್ಷಕರು ಜೋತುಬಿದ್ದಿರುವುದರ ಮೂಲಕ ಕಲಿಕೆಯ ನಾವೀನ್ಯಯುತ ಬದಲಾವಣೆಗಳಿಗೆ ಶಿಕ್ಷಕರು ಒಡ್ಡಿಕೊಳ್ಳದೇ ಇರುವುದು ಕಂಡು ಬರುತ್ತದೆ.
- ಶಿಕ್ಷಕರು ಏಕಶಿಸ್ತೀಯ ಜ್ಞಾನವನ್ನು ಹೊಂದಿದ್ದು ಅಂತರ್ ಶಿಸ್ತೀಯ ಜ್ಞಾನದ ಕೊರತೆ ಮತ್ತು ಕಲಿಕೆಯ ಕೊರತೆಯಿಂದ ತರಗತಿಯಲ್ಲಿ ಪರಿಣಾಮಕಾರಿಯಾದ ಕಲಿಕೆಯನ್ನು ಉಂಟು ಮಾಡುವಲ್ಲಿ ವಿಫಲರಾಗುತ್ತಿರುವುದನ್ನ ಕಾಣಬಹುದಾಗಿದೆ.
- ಶಿಕ್ಷಕರು ಬೋಧನಾ ಕಾರ್ಯದ ಜೊತೆಗೆ ಇತರೆ ಹೆಚ್ಚಿನ ಕೆಲಸ ಕಾರ್ಯಗಳನ್ನು, ಆಡಳಿತಾತ್ಮಕ ಕೆಲಸಗಳನ್ನು ನಿಭಾಯಿಸುವುದರಿಂದ ಮಕ್ಕಳಿಗೆ ಪರಿಣಾಮಕಾರಿಯಾದ ಕಲಿಕೆಯನ್ನು ನಿಡುವಲ್ಲಿ ಸಾಧ್ಯವಾಗದೇ ಇರುವುದನ್ನ ಕಾಣಬಹುದಾಗಿದೆ.
- ಶಿಕ್ಷಕರ ಬೋಧನೇತರ ಕಾರ್ಯಗಳಾದಂತಹ ಮತದಾರರ ಪಟ್ಟಿ ತಯಾರಿಕೆ, ತರಬೇತಿ ಕಾರ್ಯಗಾರಗಳು, ಜನಗಣತಿ, ಜಾತಿ ಗಣತಿ, ಜಾನುವಾರ ಗಣತಿ ಮತ್ತು ಇತರೆ ಕೆಲಸಗಳ ನಿರ್ವಹಣೆಯ ಜವಾಬ್ದಾರಿಯಿಂದ ಶಿಕ್ಷಕರು ಒತ್ತಡದ ವಾತಾವರಣದಲ್ಲಿರುವುದು ಕಂಡು ಬರುತ್ತದೆ.
- ಶಿಕ್ಷಕರು ಬೋಧನೆಯ ಸಂದರ್ಭದಲ್ಲಿ ಪರಿಣಾಮಕಾರಿಯಾದ ಕಲಿಕೆಯನ್ನು ಉಂಟು ಮಾಡಲು ಸೃಜನಶೀಲ ಕಲಿಕಾ ಸಾಮಗ್ರಿಗಳ ಬಳಕೆಯನ್ನು ಮಾಡದೇ ಇರುವುದು ಕಂಡು ಬರುತ್ತದೆ.
- ಶಾಲೆಯಲ್ಲಿ ಮಕ್ಕಳಿಗೆ ಪರಿಪೂರ್ಣ ಕಲಿಕೆಯನ್ನ ಉಂಟುಮಾಡಲು ಶಿಕ್ಷಕರು ಸರಿಯಾದ ಬೋಧನಾ ವಿಧಾನಗಳು, ಬೋಧನೋಪಕರಣಗಳ ಬಳಕೆ, ಬೋಧನಾ ತಂತ್ರಗಳ ಅಳವಡಿಕೆ ಇವುಗಳ ಜೊತೆಗೆ ಮಕ್ಕಳಲ್ಲಿ ಉಂಟಾದ ಕಲಿಕೆಯನ್ನು ತಿಳಿಯುವ ತಂತ್ರಗಾರಿಕೆ, ವಿವಿಧ ಬೋಧನಾ ಕೌಶಲ್ಯಗಳ ಬಳಕೆಗಳನ್ನು ಸಮರ್ಪಕವಾಗಿ ಮಾಡದೇ ಇರುವುದರಿಂದ ಸಹ ಮಕ್ಕಳು ಸಮರ್ಪಕವಾಗಿ ಕಲಿಯುವಲ್ಲಿ ವಿಫಲರಾಗುತ್ತಿದ್ದಾರೆ.
- ಶಿಕ್ಷಕರು ಶಾಲೆಯಲ್ಲಿ ಸಹೋದ್ಯೋಗಿ ಶಿಕ್ಷಕರೊಂದಿಗೆ ಹಿತಕರವಾದ ಸಂಬಂಧವನ್ನು ಹೊಂದದೆ ಇರುವುದು ಸಹ ಮಕ್ಕಳ ಕಲಿಕೆಯ ಮೇಲೆ ಪರಿಣಾಮ ಬೀರುತ್ತದೆ. ಮಕ್ಕಳು ಮಾನಸಿಕವಾಗಿ ಸಿದ್ಧರಿದ್ದಾಗ ಮಾತ್ರ ಪರಿಪೂರ್ಣವಾದ ಬೋಧನೆಯೊಂದಿಗೆ ಕಲಿಕೆಯನ್ನ ಕಲಿಸಲು ಸಾಧ್ಯವಾಗುತ್ತದೆ. ಇಲ್ಲದೆ ಹೋದರೆ ಬೋಧನೆಯು ನಿರಾಶಾದಾಯಕವಾಗುವುದನ್ನ ಕಾಣಬಹುದಾಗಿದೆ.
- ಗಡಿಭಾಗದಲ್ಲಿ ಕಂಡು ಬರುವ ಏಕೋಪಾಧ್ಯಾಯ ಶಾಲೆಗಳಲ್ಲಿ ಶಿಕ್ಷಕರ ಕೊರತೆಯಿಂದ ಎಲ್ಲಾ ವಿಷಯವನ್ನು ಒಬ್ಬ ಶಿಕ್ಷಕರು ಬೋಧಿಸುವುದರಿಂದ ಎಲ್ಲ ಮಕ್ಕಳ ಕಡೆಗೆ ಗಮನ ಹರಿಸದೆ ಹಾಗೂ ವಿಷಯವನ್ನು ಮಕ್ಕಳಿಗೆ ಸರಿಯಾಗಿ ಕಲಿಸದೆ ಶಾಲೆಯಲ್ಲಿ ಮಕ್ಕಳು ಕಲಿಕೆಯಲ್ಲಿ ಕುಂಠಿತ ಪ್ರಗತಿಯನ್ನು ಕಾಣುತ್ತಿರುವುದು ಕಂಡು ಬರುತ್ತದೆ.

ಹೀಗೆ ಶಿಕ್ಷಕರು ಏಕೋಪಾಧ್ಯಾಯ ಶಾಲೆಗಳಲ್ಲಿ ಶಾಲೆಯ ಆಡಳಿತ ಕೆಲಸ ಕಾರ್ಯಗಳೊಂದಿಗೆ ವಿಷಯ ಶಿಕ್ಷಕರ ಅಭಾವದಿಂದ ಮಕ್ಕಳಲ್ಲಿ ಸಮರ್ಪಕವಾದ ಕಲಿಕೆಯನ್ನು ಉಂಟು ಮಾಡುವಲ್ಲಿ ವಿಫಲರಾಗುತ್ತಿದ್ದಾರೆ.

ಶಿಕ್ಷಕರು ಭಾಷಾ ಬೋಧನೆಯ ಸಂದರ್ಭದಲ್ಲಿ ತಮ್ಮ ಮಾತೃಭಾಷೆಯ ಬಗೆಗೆ ವಿಶೇಷ ಅಭಿಮಾನ ಮತ್ತು ಆಸಕ್ತಿಯನ್ನು ಹೊಂದಿದವರಾಗಿರಬೇಕು. ಮಕ್ಕಳಿಗೆ ಭಾಷಾಭಿಮಾನ ಮತ್ತು ಆಸಕ್ತಿ ಬೆಳೆಯುವಂತೆ ವಿವಿಧ ಕಾರ್ಯಚಟುವಟಿಕೆಯನ್ನ ಹಮ್ಮಿಕೊಳ್ಳುವುದರ ಮೂಲಕ ಸೃಜನಶೀಲತೆಯ ಗುಣಗಳನ್ನ ಹೊಂದಿರಬೇಕು. ಭಾಷೆಯನ್ನು ಬೋಧಿಸುವ ಶಿಕ್ಷಕ ಮೊದಲು ತನ್ನ ಭಾಷೆಯಲ್ಲಿ ಪಾಂಡಿತ್ಯ ಪಡೆದವನಾಗಿರಬೇಕು. ಇದರ ಜೊತೆ ಒಂದಕ್ಕಿಂತ ಹೆಚ್ಚಿನ ಭಾಷೆಯನ್ನು ಬಲ್ಲವನಾಗಿರಬೇಕು. ಭಾಷಾ ಬೋಧನೆಗೆ ಸಂಬಂಧಿಸಿದ ಹಾಗೆ ಬೋಧನಾ ಕ್ಷೇತ್ರದಲ್ಲಿ ಉಂಟಾಗುವ ಬದಲಾವಣೆಗಳನ್ನು ಗಮನಿಸುತ್ತಾ ಹೊಸ ಹೊಸ ಪದ್ಧತಿಗಳ ಮೂಲಕ ಭಾಷೆಯನ್ನು ಬೋಧನೆ ಮಾಡಲು ಮುಂದಾಗಬೇಕು. ಶಿಕ್ಷಕ ಭಾಷಾ ಕಲಿಕೆಯು ಹೆಚ್ಚು ಪರಿಣಾಮಕಾರಿಯಾಗಿಸಲು ಬೋಧನೆಯಲ್ಲಿ ಸಮೂಹ ಮಾಧ್ಯಮಗಳ ಬಳಕೆಯನ್ನು ಮಾಡಿಕೊಳ್ಳಬೇಕು. ಇದರೊಂದಿಗೆ ಭಾಷಾ ಪ್ರಯೋಗಾಲಯದ ಸಮರ್ಪಕ ಬಳಕೆಯನ್ನು ಮಾಡುವ ಸಾಮಥ್ರ್ಯವನ್ನು ಹೊಂದಿರಬೇಕು. ಉತ್ತಮ ಶಿಕ್ಷಕನಾದವರು ಯಾವಾಗಲು ಉತ್ತಮ ವಿದ್ಯಾರ್ಥಿಯಾಗಿಯೇ ಮುಂದುವರೆಯುವುದರಿಂದ ಮಕ್ಕಳ ಕಲಿಕೆಯಲ್ಲಿ ಹೆಚ್ಚು ಪ್ರಗತಿಯನ್ನ ಕಾಣಲು ಸಾಧ್ಯವಾಗುತ್ತದೆ.

ದೇವನೂರು ಮಹಾದೇವ ಅವರು ಹೇಳಿರುವ ಹಾಗೆ ಸರ್ಕಾರಿ ಶಾಲೆಗಳಲ್ಲಿ ಕನ್ನಡ ಮಾಧ್ಯಮ ಉಳಿಯಬೇಕಾದರೆ ಏಕರೂಪದ ಶಿಕ್ಷಣ ಜಾರಿಯಾಗಬೇಕು. ಆಗ ಸಮಾನ ಶಿಕ್ಷಣ ನೀತಿಯಿಂದ ಕಲಿಕಾ ಮಾಧ್ಯಮವಾಗಿ ಕನ್ನಡ ಕಡ್ಡಾಯವಾಗುತ್ತದೆ. ಆಗ ಕನ್ನಡ ಮಾಧ್ಯಮದ ಮೂಲಕ ಕಲಿಯುವಂತಹ ಸ್ಥಿತಿಯು ಅನಿವಾರ್ಯವಾಗಿ ನಿರ್ಮಾಣವಾಗುತ್ತದೆ. ಮಾತೃಭಾಷೆಯಲ್ಲಿ ಮಗುವನ್ನು ಕಲಿಸುವುದೆಂದರೆ ನೀರಿನಲ್ಲಿ ಈಜಲು ಕಲಿಸಿದಂತೆ. ಮುಳುಗುವ ಭಯವೂ ಕಾಡಿಸುತ್ತದೆ. ಇಂಗ್ಲಿಷ್‌ನಂಥ ಪರಕೀಯ ಭಾಷೆಯಲ್ಲಿ ಕಲಿಸುವುದೆಂದರೆ ಬೆನ್ನಮೇಲೆ ಕಲ್ಲು ಕಟ್ಟಿ ಈಜಲು ಕಲಿಸಿದಂತೆ, ಮುಳುಗುವ ಭಯಕ್ಕೆ ಹೆಚ್ಚು ಅವಕಾಶ ಕಲ್ಪಿಸಿಕೊಟ್ಟಂತಾಗುವುದು. ಮಾತೃಭಾಷೆಯಲ್ಲಿ ಕಲಿಯುವವನಿಗೆ ಕಲಿಯುವ ವಿಷಯದ ಕಠಿಣತೆ ಮಾತ್ರ ಎದುರಾಗಬಹುದು. ಆದರೆ ಪರಕೀಯ ಭಾಷೆಯಲ್ಲಿ ಓದುವವನಿಗೆ ಎರಡು ಬಿಕ್ಕಟ್ಟುಗಳು– ಒಂದು ಭಾಷೆಯ ಕಠಿಣತೆ, ಮತ್ತೊಂದು ವಿಷಯದ ಕಠಿಣತೆ, ಆದ್ದರಿಂದ ನಿಜವಾದ ತಿಳಿವಳಿಕೆ ಮತ್ತು ಜ್ಞಾನ ದೊರಕಿಸಲು ಮಾತೃಭಾಷೆಯ ಮಾಧ್ಯಮವೇ ಲೇಸು. ಈ ರೀತಿಯಾಗಿ ಶಿಕ್ಷಕರು ಮಕ್ಕಳಿಗೆ ಅವರ ಮಾತೃಭಾಷೆಯಲ್ಲಿ ಬೋಧನೆಯನ್ನು ಮಾಡುವುದರ ಮೂಲಕ ಮಕ್ಕಳಲ್ಲಿ ಪರಿಣಾಮಕಾರಿ ಕಲಿಕೆಯನ್ನುಂಟುಮಾಡಬೇಕು.

ಈ ರೀತಿಯಾಗಿ ಗಡಿಭಾಗದಲ್ಲಿ ಕಂಡು ಬರುವ ದ್ವಿಭಾಷಿಕ ಪರಿಸರ ಮತ್ತು ಬಹುಭಾಷಿಕ ಪರಿಸರದಲ್ಲಿ ಕನ್ನಡ ಭಾಷೆಯನ್ನು ಕಲಿಯುವಲ್ಲಿ ಮಕ್ಕಳು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿರುವುದು ಕಂಡು ಬರುತ್ತದೆ. ಇದರೊಂದಿಗೆ ಮಕ್ಕಳಿಗೆ ಕನ್ನಡ ಭಾಷೆಯನ್ನು ಬೋಧಿಸುವಂತಹ ಶಿಕ್ಷಕರಿಗೆ ಸ್ಥಳಿಯ ಭಾಷೆಯ ಅರಿವಿನ ಕೊರತೆಯಿಂದ ಮಕ್ಕಳು ಮತ್ತು ಶಿಕ್ಷಕರ ನಡುವೆ ಬಾಂಧವ್ಯದ ಕೊರತೆಯಿಂದ ಮಕ್ಕಳು ಶಾಲಾ ಪರಿಸರದಲ್ಲಿ ಕನ್ನಡ ಭಾಷೆಯನ್ನು ಕಲಿಯುವಲ್ಲಿ ವಿಫಲರಾಗುತ್ತಿದ್ದಾರೆ. ಇದರಿಂದ ಗಡಿಭಾಗದಲ್ಲಿ ನಿಯೋಜನೆಗೊಳ್ಳುವ ಶಿಕ್ಷಕರು ಗಡಿಪರಿಸರದಲ್ಲಿ ಬಳಕೆಯಲ್ಲಿರುವ ತೆಲುಗು ಭಾಷೆಯನ್ನು ಇಲ್ಲವೆ ಆಯಾ ಪ್ರದೇಶದ ಮಕ್ಕಳ ಮಾತೃಭಾಷೆಯನ್ನು ತಿಳಿದಿದ್ದರೆ ಮಾತ್ರ ಮಕ್ಕಳಲ್ಲಿ ಉತ್ತಮವಾದ ಕಲಿಕೆಯನ್ನು ಮೂಡಿಸಲು ಸಾಧ್ಯವಾಗುತ್ತದೆ.

ಪರಾಮರ್ಶನ ಗ್ರಂಥಗಳು


- ಚೆಲುವ ಕನ್ನಡ, ಸಿ.ವಿ.ಕೆರಿಮನಿ(ಸಂ), ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೧೨.
- ಕನ್ನಡ ಜಗತ್ತು ಅರ್ಧಶತಮಾನ, ಕೆ.ವಿ.ನಾರಾಯಣ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೭.
- ನುಡಿಸೊಗಡು, ಮುಖ್ಯಮಂತ್ರಿ ಚಂದ್ರು (ಸಂ), ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೨೦೧೨.
- ನಾಡು–ನುಡಿ, ಪಾಟೀಲ ಪುಟ್ಟಪ್ಪ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೭.
- ಗಡಿನಾಡು ನುಡಿಸೊಗಡು, ಮೋಹನ್ ಕುಂಟಾರ್, ಯಾಜಿ ಪ್ರಕಾಶನ, ಹೊಸಪೇಟೆ,೨೦೧೭.
- ವಿಷಯಾಧಾರಿತ ಕನ್ನಡ ಬೋಧನಾ ವಿಧಾನ, ಎಸ್.ಶಿವಯ್ಯ, ಪೂಜಾ ಪ್ರಕಾಶನ, ದಾವಣಗೆರೆ, ೨೦೧೨.
- ನುಡಿನೋಟ, ಟಿ.ಪಾಂಡುರಂಗಬಾಬು, ಆಕಾಶ್ ಪ್ರಕಾಶನ ಹೊಸಪೇಟೆ, ೨೦೦೫.
- ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೧ ಭಾಷೆ, ಕೆ. ವಿ. ನಾರಾಯಣ(ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.
- ಕನ್ನಡ ಆಲಯ, ಎಸ್.ಚಿದಾನಂದಮೂತಿ, ಸ್ವಪ್ನ ಬುಕ್ ಹೌಸ್, ಬೆಂಗಳೂರು ೨೦೧೭.
- ಮುಂಬಾಯಿ ಕರ್ನಾಟಕದ ಗಡಿನಾಡ ಕನ್ನಡಿಗರ, ಶೈಕ್ಷಣಿಕ ಸ್ಥಿತಿಗತಿ: ಒಂದು ಅಧ್ಯಯನ, ಡಾ.ಎಸ್.ಎಂ. ಹತ್ತಿ, ಶಶಿಕಿರಣ ಪ್ರಕಾಶನ, ಧಾರವಾಡ, ೨೦೧೦.
- ಮಾತೃಭಾಷೆ ತತ್ತ್ವ ಮತ್ತು ಬೋಧನಾ ಮಾರ್ಗ, ಅನುಸೂಯ ವಿ.ಪರಗಿ, ಅನುಸೂಯ ಪ್ರಕಾಶನ ಪುರವರ, ೧೯೯೦.
- ವಿಷಯಾಧಾರಿತ ಬೋಧನಾ ಪದ್ದತಿ ಕನ್ನಡ, ಓಬಳೇಶ್ವರ ಘಟ್ಟಿ, ವಿದ್ಯಾನಿಧಿ ಪ್ರಕಾಶನ, ಗದಗ, ೧೯೯೨.
- ವಿಷಯಾಧಾರಿತ ಕನ್ನಡ ಬೋಧನಾ ವಿಧಾನ, ಡಾ.ಎಸ್. ಶಿವಯ್ಯ, ಪೂಜಾ ಪ್ರಕಾಶನ, ದಾವಣಗೆರೆ, ೨೦೧೨.
- ಕಲಿಕೆಯನ್ನು ಅನುಕೂಲಿಸುವುದು– ಕನ್ನಡ, ಪ್ರೊ. ಶಂಕರಲಿಂಗ ಹೆಂಬಾಡಿ, ಶ್ರೀ ಸಿದ್ದೇಲಿಂಗೇಶ್ವರ ಪ್ರಕಾಶನ, ಗುಲಬರ್ಗಾ, ೨೦೧೩.
- ಬೋಧನಾ ನಿಯಮಗಳು ಮತ್ತು ಶಿಕ್ಷಣ ಸಮಸ್ಯೆಗಳು, ಕೃಷ್ಣಪ್ಪ ಎಸ್, ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು, ೧೯೮೨.


* * * *